# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜುಲೈ ೨೧, ೨೦೧೬ (ಆಷಾಢ ೩೦, ಶಕ ವರ್ಷ ೧೯೩೮)<br>Bengaluru, Thursday, July 21, 2016 ( Ashadha 30, Shaka Varsha 1938) | ಸಂಚಿಕೆ ೨೯<br>Issue 29 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಾಯಕ ಇಲಾಖೆ**

**ಸಹಕಾರಿಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1 ಆಲಿ ಆಸ್ಕರ್ ರಸ್ತೆ,**

**ಬೆಂಗಳೂರು-52 ಇವರ ನ್ಯಾಯಾಲಯ,**

**ದಾವಾ ಸಂಖ್ಯೆ: ಆರ್‌ಸಿಎಸ್/ಡಿ-4/ಡಿಐಎಸ್/ಸೌಹಾರ್ದ್/1034/2015-16.**

**ವಾದಿ**

**ಶ್ರೀ ವೈ. ಕುಮಾರ್,**
ವಿಶೇಷಾಧಿಕಾರಿ,
ಸೆವೆನ್ ಹಿಲ್ಸ್ ವಿವಿದೋದ್ದೇಶ ಸೌಹಾರ್ದ ಕೋ-ಆಪರೇಟಿವ್ ನಿ.,
ನಂ.385/1, ಮಾರುತಿ ಬಡಾವಣೆ, ಮಾಲೂರು ಟೌನ್,
ಕೋಲಾರ ಜಿಲ್ಲೆ

**ವಿಳಾಸ**
**ಶ್ರೀ ವೈ. ಕುಮಾರ್,**
ಉಪ ಪ್ರಧಾನ ವ್ಯವಸ್ಥಾಪಕರು,
ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ ನಿಯಮಿತ,
ನಿರ್ಮಾಣ ಭವನ, ಡಾ: ರಾಜ್ ಕುಮಾರ್ ರಸ್ತೆ,
1 ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10.

**ಪ್ರತಿವಾದಿಗಳು**

**SRI EKANATH @ E N DHAGE**
S/O Namdev Dhage
Kannala Village, Nagatana Hobli,
Vijayapura Taluk,
Vijayapura District.

**ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪುಪೂರ್ವ ಜಪ್ತಿ ಆದೇಶ.**

ವಾದಿಯು ಈ ದಾವೆಯನ್ನು ಪ್ರತಿವಾದಿಯ ವಿರುದ್ಧ ದಾಖಲಿಸಿ ಪ್ರತಿವಾದಿಯು ವಾದಿ ಸಹಕಾರಿಯ ಆಡಳಿತ ಮಂಡಳಿಯ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದ ಅವಧಿಯಲ್ಲಿ ವಾದಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿದ್ದ ಠೇವಣಿ ಹಣ ಹಾಗೂ ಇತರೆ ನಿಧಿಗಳನ್ನು ದುರುಪಯೋಗಪಡಿಸಿಕೊಂಡು ಷೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ವತ್ತುಗಳನ್ನು ಖರೀದಿಸಿರುವುದರಿಂದ ಸದರಿ ಸ್ವತ್ತುಗಳನ್ನು ಸಹಕಾರಿಯ ವಶಕ್ಕೆ ನೀಡಲು ಆದೇಶಿಸಬೇಕೆಂದು ಕೋರಿರುತ್ತಾರೆ.

ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ಹಿತದೃಷ್ಟಿಯಿಂದ ಪ್ರತಿವಾದಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿದ್ದರು.

ಅರ್ಜಿದಾರರು ತಮ್ಮ ದಾವಾ ಅರ್ಜಿಯಲ್ಲಿ ವಾದಿ ಸಹಕಾರಿಯ ಆಡಳಿತ ಮಂಡಳಿಯನ್ನು ರದ್ದುಗೊಳಿಸಿದ್ದು, ಪ್ರತಿವಾದಿಯು ರದ್ದುಗೊಳಿಸಿದ ಸಹಕಾರಿಯ ಆಡಳಿತ ಮಂಡಳಿಯ ನಿರ್ದೇಶಕರಾಗಿದ್ದರೆಂದೂ, ಪ್ರತಿವಾದಿಯು ಸಹಕಾರಿಯ ನಿಧಿಗಳಿಂದ ಷೆಡ್ಯೂಲ್ ಸ್ವತ್ತನ್ನು ಖರೀದಿಸಿದ್ದಾರೆಂದು ಅರ್ಜಿಯಲ್ಲಿ ಹೇಳಿ, ಹೀಗೆ ಖರೀದಿಸಿದ ಸದರಿ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡುವ ಸಾಧ್ಯತೆ ಇರುವ ಕಾರಣ ವಿಶೇಷಾಧಿಕಾರಿಗಳು ಸಹಕಾರಿಯ ಸ್ವತ್ತನ್ನು ಕಾಪಾಡಲು ಷೆಡ್ಯೂಲ್ ಸ್ವತ್ತನ್ನು ಅರ್ಜಿದಾರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿರುವುದಾಗಿ

ಅರ್ಜಿಯಲ್ಲಿ ಹೇಳಿರುತ್ತಾರೆ. ಷೆಡ್ಯೂಲ್ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿದ್ದರು.

ಅರ್ಜಿದಾರರ ಅರ್ಜಿ ಪುರಸ್ಕರಿಸಲು ಯೋಗ್ಯವೆಂಬುದನ್ನು ಮನಗಂಡು ಪ್ರತಿವಾದಿಯು ಸಹಕಾರಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಅವಧಿಯಲ್ಲಿ ಸಹಕಾರಿಯ ಆಡಳಿತ ಮಂಡಳಿಯ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದಾರೆಂದು, ಪ್ರತಿಪಾದಿಸಿರುವ ಹಿನ್ನೆಲೆಯಲ್ಲಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ದೃಷ್ಟಿಯಿಂದ ದಿನಾಂಕ: 19–02–2016 ರಂದು ಪ್ರತಿವಾದಿಯವರಿಗೆ ಸೇರಿದ ಸ್ಥಿರಾಸ್ತಿಯನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ಉಪಬಂಧಗಳಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶದ ನೋಟೀಸು ನೀಡಿ ಆದೇಶಸಲಾಗಿತ್ತು ಹಾಗೂ ಈ ನೋಟೀಸಿನಲ್ಲಿ ಪ್ರತಿವಾದಿಯು ತನ್ನ ಆಕ್ಷೇಪಣೆ/ವಿವರಣೆ ಸಲ್ಲಿಸಲು ಉದ್ದೇಶಿಸಿದ್ದಲ್ಲಿ ಆ ನೋಟೀಸು ಪಡೆದ 30 ದಿವಸಗಳೊಳಗಾಗಿ ಸಲ್ಲಿಸಲು, ತಪ್ಪಿದಲ್ಲಿ ಸದರಿ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ಸೂಚಿಸಲಾಗಿತ್ತು. ದಿನಾಂಕ: 19–2–2016ರ ನೋಟೀಸಿನಲ್ಲಿ ಸೂಚಿಸಿದಂತೆ ಇದುವರೆವಿಗೂ ಷರತ್ತು ಪಾಲಿಸದೇ ಇರುವ ಹಿನ್ನೆಲೆಯಲ್ಲಿ ಜಪ್ತಿ ಆದೇಶವನ್ನು ಸ್ಥಿರೀಕರಿಸುವುದು ಔಚಿತ್ಯಪೂರ್ಣವಾಗಿರುವ ಕಾರಣ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ದಿನಾಂಕ: 19–02–2016 ರ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ, ಕಲಂ 44ರ ಈ ನ್ಯಾಯಾಲಯದ ನೋಟೀಸಿನಲ್ಲಿ ತಿಳಿಸಿರುವಂತೆ ಪ್ರತಿವಾದಿಯು ತನ್ನ ಆಕ್ಷೇಪಣೆ/ ವಿವರಣೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ದಿನಾಂಕ: 19–02–2016ರ ನೋಟೀಸಿನಲ್ಲಿ ಸೂಚಿಸಿರುವ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ರೀತ್ಯಾ ಪ್ರತಿವಾದಿ ಪರಭಾರೆ ಮಾಡಲು ಸಾಧ್ಯವಾಗದಂತೆ ತೀರ್ಪುಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗಿದೆ.

**ಷೆಡ್ಯೂಲ್ ಸ್ವತ್ತು :–**

**ಸ್ಥಿರಾಸ್ತಿ :**

| | |
|---|---|
| **Item-1** | All that piece and parcel of the agricultrual land bearing Survey no. 61/1,Measuring 7 Acres 27 Guntas, assessed ₹. 3,53/- acruired through M R H 22/2013-14, situated at Kannala Village, Nagatana Hobli, Vijayapura Taluk, Vijayapurar District. |
| **Item-2** | All that priece and parcel of the agricultural land bearing Survey no.61/2, Measuring 5 Acres 28 Guntas, assessed ₹ 2.59/- acruired through M R H 23/2013-14, situated at Kannala Village, Nagatana Hobli, Vijayapura Taluk, Vijayapura District. |

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 07/04/2016 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರಿನೊಂದಿಗೆ ನೀಡಲಾಗಿದೆ.

ಸಹಕಾರಿಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

**P.R. 412**
**SC-5**

**ಸಹಕಾರ ಇಲಾಖೆ**

**ಸಹಕಾರಿಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1 ಆಲಿ ಆಸ್ಕರ್ ರಸ್ತೆ,**

**ಬೆಂಗಳೂರು–52 ಇವರ ನ್ಯಾಯಾಲಯ,**

**ದಾವಾ ಸಂಖ್ಯೆ: ಆರ್‌ಸಿಎಸ್/ಡಿ–4/ಡಿಐಎಸ್/ಸೌಹಾರ್ದ/1032/2015–16.**

**ವಾದಿ**

**ಶ್ರೀ ವೈ. ಕುಮಾರ್,**
ವಿಶೇಷಾಧಿಕಾರಿ,
ಸೆವೆನ್ ಹಿಲ್ಸ್ ವಿವಿಧೋದ್ದೇಶ ಸೌಹಾರ್ದ ಕೋ–ಆಪರೇಟಿವ್ ನಿ.,
ನಂ.385/1, ಮಾರುತಿ ಬಡಾವಣೆ, ಮಾಲೂರು ಟೌನ್,
ಕೋಲಾರ ಜಿಲ್ಲೆ

**ಪ್ರತಿವಾದಿಗಳು**

**ಶ್ರೀ ಗಿಡ್ಡಪ್ಪ ನಾರಾಯಣಪ್ಪ,**
ಬಿನ್ ಗಿಡ್ಡಪ್ಪ
ನಂ.385/1, ಮಾರುತಿ ಬಡಾವಣೆ,
ಮಾಲೂರು ಟೌನ್. ಕೋಲಾರ ಜಿಲ್ಲೆ

**ವಿಳಾಸ**

**ಶ್ರೀ ವೈ. ಕುಮಾರ್,**
ಉಪ ಪ್ರಧಾನ ವ್ಯವಸ್ಥಾಪಕರು,
ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ ನಿಯಮಿತ,
ನಿರ್ಮಾಣ ಭವನ, ಡಾ: ರಾಜ್ ಕುಮಾರ್ ರಸ್ತೆ,
1 ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10.

**ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪುಪೂರ್ವ ಜಪ್ತಿ ಆದೇಶ.**

ವಾದಿಯು ಈ ದಾವೆಯನ್ನು ಪ್ರತಿವಾದಿಯ ವಿರುದ್ಧ ದಾಖಲಿಸಿ ಪ್ರತಿವಾದಿಯು ವಾದಿ ಸಹಕಾರಿಯ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದ ಅವಧಿಯಲ್ಲಿ ವಾದಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿದ್ದ ಠೇವಣಿ ಹಣ ಹಾಗೂ ಇತರೆ ನಿಧಿಗಳನ್ನು ದುರುಪಯೋಗಪಡಿಸಿಕೊಂಡು ಷೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ವತ್ತುಗಳನ್ನು ಖರೀದಿಸಿರುವುದರಿಂದ ಸದರಿ ಸ್ವತ್ತುಗಳನ್ನು ಸಹಕಾರಿಯ ವಶಕ್ಕೆ ನೀಡಲು ಆದೇಶಿಸಬೇಕೆಂದು ಕೋರಿರುತ್ತಾರೆ.

ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ಹಿತದೃಷ್ಟಿಯಿಂದ ಪ್ರತಿವಾದಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿದ್ದರು.

ಅರ್ಜಿದಾರರು ತಮ್ಮ ದಾವಾ ಅರ್ಜಿಯಲ್ಲಿ ವಾದಿ ಸಹಕಾರಿಯ ಆಡಳಿತ ಮಂಡಳಿಯನ್ನು ರದ್ದುಗೊಳಿಸಿದ್ದು, ಪ್ರತಿವಾದಿಯು ರದ್ದುಗೊಳಿಸಿದ ಸಹಕಾರಿಯ ಆಡಳಿತ ಮಂಡಳಿಯ ಅಧ್ಯಕ್ಷರಾಗಿದ್ದರೆಂದೂ, ಪ್ರತಿವಾದಿಯು ಸಹಕಾರಿಯ ನಿಧಿಗಳಿಂದ ಷೆಡ್ಯೂಲ್ ಸ್ವತ್ತನ್ನು ಖರೀದಿಸಿದ್ದಾರೆಂದು ಅರ್ಜಿಯಲ್ಲಿ ಹೇಳಿ, ಹೀಗೆ ಖರೀದಿಸಿದ ಸದರಿ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡುವ ಸಾಧ್ಯತೆ ಇರುವ ಕಾರಣ ವಿಶೇಷಾಧಿಕಾರಿಗಳು ಸಹಕಾರಿಯ ಸ್ವತ್ತುನ್ನು ಕಾಪಾಡಲು ಷೆಡ್ಯೂಲ್ ಸ್ವತ್ತುನ್ನು ಅರ್ಜಿದಾರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿರುವುದಾಗಿ ಅರ್ಜಿಯಲ್ಲಿ ಹೇಳಿರುತ್ತಾರೆ. ಷೆಡ್ಯೂಲ್ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿದ್ದರು.

ಅರ್ಜಿದಾರರ ಅರ್ಜಿ ಪುರಸ್ಕರಿಸಲು ಯೋಗ್ಯವೆಂಬುದನ್ನು ಮನಗಂಡು ಪ್ರತಿವಾದಿಯು ಸಹಕಾರಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಅವಧಿಯಲ್ಲಿ ಸಹಕಾರಿಯ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆಂದು ಪ್ರತಿವಾದಿಸಿರುವ ಹಿನ್ನೆಲೆಯಲ್ಲಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ದೃಷ್ಟಿಯಿಂದ ದಿನಾಂಕ: 19–02–2016 ರಂದು ಪ್ರತಿವಾದಿಯವರಿಗೆ ಸೇರಿದ ಸ್ಥಿರಾಸ್ತಿಯನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ಉಪಬಂಧಗಳಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶದ ನೋಟೀಸು ನೀಡಿ ಆದೇಶಸಲಾಗಿತ್ತು ಹಾಗೂ ಈ ನೋಟೀಸಿನಲ್ಲಿ ಪ್ರತಿವಾದಿಯು ತನ್ನ ಆಕ್ಷೇಪಣೆ/ವಿವರಣೆ ಸಲ್ಲಿಸಲು ಉದ್ದೇಶಿಸಿದ್ದಲ್ಲಿ ಆ ನೋಟೀಸು ಪಡೆದ 30 ದಿವಸಗಳೊಳಗಾಗಿ ಸಲ್ಲಿಸಲು, ತಪ್ಪಿದಲ್ಲಿ ಸದರಿ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ಸೂಚಿಸಲಾಗಿತ್ತು. ದಿನಾಂಕ: 19–2–2016ರ ನೋಟೀಸಿನಲ್ಲಿ ಸೂಚಿಸಿದಂತೆ ಇದುವರೆವಿಗೂ ಷರತ್ತು ಪಾಲಿಸದೇ ಇರುವ ಹಿನ್ನೆಲೆಯಲ್ಲಿ ಜಪ್ತಿ ಆದೇಶವನ್ನು ಸ್ಥಿರೀಕರಿಸುವುದು ಔಚಿತ್ಯಪೂರ್ಣವಾಗಿರುವ ಕಾರಣ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ದಿನಾಂಕ: 19–02–2016 ರ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ, ಕಲಂ 44ರ ಈ ನ್ಯಾಯಾಲಯದ ನೋಟೀಸಿನಲ್ಲಿ ತಿಳಿಸಿರುವಂತೆ ಪ್ರತಿವಾದಿಯು ತನ್ನ ಆಕ್ಷೇಪಣೆ/ ವಿವರಣೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ದಿನಾಂಕ: 19–02–2016ರ ನೋಟೀಸಿನಲ್ಲಿ ಸೂಚಿಸಿರುವ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ರೀತ್ಯಾ ಪ್ರತಿವಾದಿ ಪರಭಾರೆ ಮಾಡಲು ಸಾಧ್ಯವಾಗದಂತೆ ತೀರ್ಪುಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗಿದೆ.

**ಷೆಡ್ಯೂಲ್ ಸ್ವತ್ತು :–**

**ಸ್ಥಿರಾಸ್ತಿ :**

| ಕ್ರ.ಸಂ | ಗ್ರಾಮದ ಹೆಸರು | ರೆವಿನ್ಯೂ ಸರ್ವೆ ನಂಬರ್ | ಟೌನ್ ಸರ್ವೆ ನಂಬರ್ | ಎಕ್ರೆ–ಸೆಂಟ್ಸ್ | ಚಕ್ಕುಬಂದಿ |
|---|---|---|---|---|---|
| 1 | ಮಂಗಳೂರು ತೋಟಾ ವಿಲೇಜ್, ಜೆಪ್ಪು ವಾರ್ಡ್, ಮಂಗಳೂರು ಮಹಾನಗರ ಪಾಲಿಕೆ, ಮಂಗಳೂರು ಟೌನ್ ಮಹಾನಗರಪಾಲಿಕೆ | 501 ಪಿ | 777/3 ಪಿ | 0.53.0 | Boudaries of Town sy no 779/2 ಎ.ಪಿ<br>East by : by Road<br>West by : Survey line<br>North by : Survey line<br>South by : Survey line |
| | | 502/1ಸಿ, ಪಿ | 778/1ಸಿ, ಪಿ | 0.20.0 | Boudaries of remaining sy no<br>East by : by Road<br>West by : Survey line<br>North by : Survey line<br>South by : Survey line |
| | | 501 ಪಿ | 777/3 ಪಿ | 0.29.0 | |
| | | 502/1ಸಿ,ಪಿ | 778/1ಸಿ,ಪಿ | 0.18.0 | |
| | | 503/1ಎ,ಪಿ | 779/2ಎ,ಪಿ | 0.01.0 | |
| | | 503/1ಸಿ,ಪಿ | 779/2ಸಿ,ಪಿ | 0.01.0 | |
| | | 502/1ಸಿ, ಪಿ | 778/1ಸಿ,ಪಿ | 0.20.0 | |
| | | 502/1ಸಿ, ಪಿ | 778/1ಸಿ,ಪಿ | 0.19.0 | |
| | | 502/1ಎ, ಪಿ | 778/1ಎ,ಪಿ | 0.01.0 | |

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 07/04/2016 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರಿನೊಂದಿಗೆ ನೀಡಲಾಗಿದೆ.

ಸಹಕಾರಿಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

P.R. 413
SC - 5

**ಸಹಕಾರ ಇಲಾಖೆ**

**ಸಹಕಾರಿಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1 ಆಲಿ ಆಸ್ಕರ್ ರಸ್ತೆ,**

**ಬೆಂಗಳೂರು-52 ಇವರ ನ್ಯಾಯಾಲಯ,**

**ದಾವಾ ಸಂಖ್ಯೆ: ಆರ್‌ಸಿಎಸ್/ಡಿ-4/ಸೌಹಾರ್ದ್/1035/2015-16.**

**ವಾದಿ**

**ಮುಖ್ಯ ಕಾರ್ಯನಿರ್ವಾಹಣಾಧಿಕಾರಿ,**

ಸ್ವಾಭಿಮಾನಿ ಸೌಹಾರ್ದ ಕ್ರೆಡಿಟ್ ಕೋ-ಆಪರೇಟಿವ್ ಲಿ.,

ನಂ.125, ಡಯಾಗನಲ್ ರಸ್ತೆ, ವಿ.ವಿ. ಪುರಂ, ಬೆಂಗಳೂರು-04

**ಪ್ರತಿವಾದಿಗಳು**

1) **ಶ್ರೀ ಸುಶೀಲ್ .ಡಿ.ಆರ್.**

ಬಿನ್ ರಾಜಣ್ಣ ಡಿ. ನಂ.9, 8ನೇಮೈನ್, 8ನೇಕ್ರಾಸ್,

ಮಲ್ಲೇಶ್ವರಂ, ಬೆಂಗಳೂರು-03

2) **ಶ್ರೀ ರವೀಂದ್ರ ನಾಗ್,**

ಬಿನ್ ಶೇಷಗಿರಿರಾವ್, ನಂ.386, ಕುವೆಂಪುನಗರ,

ಜಾಲಹಳ್ಳಿ ಈಸ್ಟ್, ಬೆಂಗಳೂರು-14.

3) **ಶ್ರೀ ಅವಿನಾಷ್ ರೆಡ್ಡಿ ಪಿ.ಎಸ್.**

ಬಿನ್ ಚಂದ್ರಶೇಖರ್, ನಂ. 114, 6ನೇಕ್ರಾಸ್, 29ನೇ ಮೈನ್,

ಬಿಟಿಎಂ 2ನೇಹಂತ, ಬೆಂಗಳೂರು-76

**ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪುಪೂರ್ವ ಜಪ್ತಿ ಆದೇಶ.**

ವಾದಿಯು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997ರ ಕಲಂ 39ರಡಿ ದಾವೆ ದಾಖಲಿಸಿ ಪ್ರತಿವಾದಿಗಳಿಂದ ವಾದಿಗೆ ದಿನಾಂಕ:27/01/2016ಕ್ಕೆ ವಸೂಲಾಗಬೇಕಾಗಿರುವ ₹. 17,91,240/-ಗಳನ್ನು ಶೇ.16ರ ಬಡ್ಡಿ ಯೊಂದಿಗೆ ವಸೂಲಿ ಮಾಡಲು ಡಿಕ್ರಿ ನೀಡಲು ಕೋರಿರುತ್ತಾರೆ. ಹಾಗೂ ಪ್ರತಿವಾದಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿದ್ದರು.

ಅರ್ಜಿದಾರರು ಅರ್ಜಿಯಲ್ಲಿ ಪ್ರತಿವಾದಿಗಳು ವಾದಿ ಸಂಸ್ಥೆಯ ಸದಸ್ಯರಾಗಿದ್ದು ವ್ಯವಹಾರಕ್ಕಾಗಿ ವಾದಿ ಸಂಸ್ಥೆಗೆ ಸಾಲಕ್ಕಾಗಿ ಅರ್ಜಿ ಸಲ್ಲಿಸಿದ್ದು, ದಿನಾಂಕ:19/11/2012 ರಂದು ₹. 20,00,000/- ಸಾಲ ಪಡೆದಿದ್ದು, ಈ ಸಾಲಕ್ಕೆ ಷೆಡ್ಯೂಲ್ ಸ್ವತ್ತನ್ನು ಆಧಾರ ಮಾಡಿರುತ್ತಾರೆಂದು ಹೇಳಿ, ಪ್ರತಿವಾದಿಗಳು ಸಾಲ ತೀರುವಳಿ ಮಾಡದೇ ಸುಸ್ತಿದಾರರಾಗಿದ್ದು, ಸಾಲ ವಸೂಲಾತಿಗಾಗಿ ದಾವೆ ಹೂಡಲಾಗಿದೆಯೆಂದು, ಷೆಡ್ಯೂಲ್ ಸ್ವತ್ತನ್ನು ಪ್ರತಿವಾದಿಗಳು ಪರಬಾರೆ ಮಾಡುವ/ ವಿಲೇಮಾಡುವ ಉದ್ದೇಶ ಹೊಂದಿದ್ದು, ಅದನ್ನು ವಿಲೇ ಮಾಡಿದಲ್ಲಿ ಈ ದಾವೆಯಲ್ಲಿ ಮುಂದೆ ಆದೇಶ ಹೊರಡಿಸಿದರೂ ಅದನ್ನು ಜಾರಿ ಮಾಡಿ ಹಣ ವಸೂಲಿ ಮಾಡಿಕೊಳ್ಳಲು ತೊಂದರೆಯಾಗುವುದರಿಂದ, ಅದನ್ನು ವಿಲೇ ಮಾಡಲು ಸಾಧ್ಯವಾಗದಂತೆ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿದ್ದರು.

ವಾದಿ ಪರ ವಕೀಲರು ಹಾಜರಾಗಿ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಮಂಡಿಸಿದ ವಾದವನ್ನು ಆಲಿಸಿ, ಅರ್ಜಿದಾರರ ಅರ್ಜಿ ಪುರಸ್ಕರಿಸಲು ಯೋಗ್ಯವೆಂಬುದನ್ನು ಮನಗಂಡು, ವಾದಿಯ ದಾವಾ ಅರ್ಜಿ, ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಸಲ್ಲಿಸಿರುವ ಅರ್ಜಿ ಹಾಗೂ ಅರ್ಜಿಯೊಂದಿಗೆ ಸಲ್ಲಿಸಿರುವ ದಾಖಲೆಗಳು ಇವುಗಳನ್ನು ಪರಿಶೀಲಿಸಿ, ಷೆಡ್ಯೂಲ್ಡ್ ಸ್ವತ್ತನ್ನು ಪ್ರತಿವಾದಿಗಳು ವಿಲೇ ಮಾಡಿದಲ್ಲಿ ಪ್ರತಿವಾದಿಯ ವಿರುದ್ಧ ದಾವೆಯಲ್ಲಿ ಡಿಕ್ರಿ ನೀಡಿದರೂ ಅದನ್ನು ಜಾರಿ ಮಾಡಲು ಸಾಧ್ಯವಿಲ್ಲದಂತಾಗುವುದೆಂಬ ವಾದಿಯ ಕೋರಿಕೆ ಪರಿಗಣಿಸಿ, ಪ್ರತಿವಾದಿಯವರಿಗೆ ಸೇರಿದ ಸ್ಥಿರಾಸ್ತಿಯನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ಉಪಬಂಧಗಳಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶದ ನೋಟೀಸು ನೀಡಿ ಆದೇಶಿಸಲಾಗಿತ್ತು ಹಾಗೂ ಈ ನೋಟೀಸಿನಲ್ಲಿ ಪ್ರತಿವಾದಿಯು ಈ ಆದೇಶವನ್ನು ತೆರವುಗೊಳಿಸಲು ಇಚ್ಚಿಸಿದಲ್ಲಿ ₹. 17,91,240/-ಗಳನ್ನು ವಾದಿ ಸಂಸ್ಥೆಯಲ್ಲಿ ಭದ್ರತೆಗಾಗಿ ಠೇವಣಿ ಮಾಡಿ, ಠೇವಣಿ ಮಾಡಿದ ದಾಖಲೆಯನ್ನು ಆ ನೋಟೀಸು ಪಡೆದ 30 ದಿವಸಗಳೊಳಗಾಗಿ ಸಲ್ಲಿಸಲು ತಪ್ಪಿದಲ್ಲಿ ಸದರಿ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ಸೂಚಿಸಲಾಗಿತ್ತು. ದಿನಾಂಕ:26/02/2016 ರ ನೋಟೀಸಿನಲ್ಲಿ ಸೂಚಿಸಿದಂತೆ ಇದುವರೆವಿಗೂ ಷರತ್ತು ಪಾಲಿಸದೇ ಇರುವ ಹಿನ್ನೆಲೆಯಲ್ಲಿ ಜಪ್ತಿ ಆದೇಶವನ್ನು ಸ್ಥಿರೀಕರಿಸುವುದು ಔಚಿತ್ಯಪೂರ್ಣವಾಗಿರುವ ಕಾರಣ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ರೀತ್ಯಾ ಈ ಪ್ರಾಧಿಕಾರದ ದಿನಾಂಕ: 26/02/2016 ನೋಟೀಸಿನಲ್ಲಿ ತಿಳಿಸಿರುವಂತೆ ಪ್ರತಿವಾದಿಯು ಈ ಆದೇಶವನ್ನು ತೆರೆವುಗೊಳಿಸಲು ₹. 17,91,240/-ಗಳನ್ನು ವಾದಿ ಸಂಸ್ಥೆಯಲ್ಲಿ ಭದ್ರತೆಗಾಗಿ ಠೇವಣಿ ಮಾಡಿ, ಠೇವಣಿ ಮಾಡಿದ ದಾಖಲೆಯನ್ನು ಆ ನೋಟೀಸು ಪಡೆದ 30 ದಿವಸಗಳೊಳಗಾಗಿ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ದಿನಾಂಕ: 26/02/2016 ರ ನೋಟೀಸಿನಲ್ಲಿ ಸೂಚಿಸಿರುವ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ರೀತ್ಯಾ ಪ್ರತಿವಾದಿ ಪರಭಾರೆ ಮಾಡದಂತೆ ತೀರ್ಪುಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗಿದೆ.

**ಷೆಡ್ಯೂಲ್ ಎ ಸ್ವತ್ತು :-**

**ಸ್ಥಿರಾಸ್ತಿ :**

All that piece and parcel of the property No. 51/1, Opposite to Sri. Mariswamy Mutt Road, situated at MTB Road, Bengaluru-02, bearing property No. 47-78-51/1 of BTM Road in Ward No.47 Bengaluru, Measuring East to West: 13 Feet and North to South : 47.5 feet in all Measuring 634 Sq.Ft. and consisting of Ground floor Shop building along with RCC roofed building, Cement Flooring with all civic amenities and totaly six and a half Square and bounded on the

East by -------------- Remaining Property sold to Smt Nitya and Harish,

West by-------------property belongs to Siddaramaiah,

North by------------prorerty belongs to Shamega Begaum and

South by-----------Mariswamy Mutt

**STOCK IN TRADE**

The item No.2 at the Shop/Business premises of Respondent No.1 property No. 51/1, Opposite to Sri.Mariswamy Mutt Road, Situted at MTB Road Bengaluru-02, bearing property No. 47-78-51/1 of BTM Road in ward No.47 Bengaluru.

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 07–04–2016 ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

**PR-414** ಸಹಕಾರಿಗಳ ನಿಬಂಧಕರು,

**SC-5** ಕರ್ನಾಟಕ ರಾಜ್ಯ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರಿಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1 ಆಲಿ ಆಸ್ಕರ್ ರಸ್ತೆ,**

**ಬೆಂಗಳೂರು–52 ಇವರ ನ್ಯಾಯಾಲಯ,**

**ದಾವಾ ಸಂಖ್ಯೆ: ಆರ್‌ಸಿಎಸ್/ಡಿ–4/ಡಿಐಎಸ್/ಸೌಹಾರ್ದ್/1033/2015–16.**

| **ವಾದಿ** | **ಪ್ರತಿವಾದಿಗಳು** |
|---|---|
| **ಶ್ರೀ ವೈ. ಕುಮಾರ್,**<br>ವಿಶೇಷಾಧಿಕಾರಿ,<br>ಸೆವೆನ್ ಹಿಲ್ಸ್ ವಿವಿದೋದ್ದೇಶ ಸೌಹಾರ್ದ ಕೋ–ಆಪರೇಟಿವ್ ನಿ.,<br>ನಂ.385/1, ಮಾರುತಿ ಬಡಾವಣೆ, ಮಾಲೂರು ಟೌನ್,<br>ಕೋಲಾರ ಜಿಲ್ಲೆ | **ಶ್ರೀ ಗಿಡ್ಡಪ್ಪ ನಾರಾಯಣಪ್ಪ,**<br>ಬಿನ್ ಗಿಡ್ಡಪ್ಪ<br>ನಂ.385/1, ಮಾರುತಿ ಬಡಾವಣೆ,<br>ಮಾಲೂರು ಟೌನ್. ಕೋಲಾರ ಜಿಲ್ಲೆ |

**ವಿಳಾಸ**

ಶ್ರೀ ವೈ. ಕುಮಾರ್,
ಉಪ ಪ್ರಧಾನ ವ್ಯವಸ್ಥಾಪಕರು,
ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ ನಿಯಮಿತ,
ನಿರ್ಮಾಣ ಭವನ, ಡಾ: ರಾಜ್ ಕುಮಾರ್ ರಸ್ತೆ,
1 ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10.

**ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪುಪೂರ್ವ ಜಪ್ತಿ ಆದೇಶ.**

ವಾದಿಯು ಈ ದಾವೆಯನ್ನು ಪ್ರತಿವಾದಿಯ ವಿರುದ್ಧ ದಾಖಲಿಸಿ ಪ್ರತಿವಾದಿಯು ವಾದಿ ಸಹಕಾರಿಯ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದ ಅವಧಿಯಲ್ಲಿ ವಾದಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿದ್ದ ಠೇವಣಿ ಹಣ ಹಾಗೂ ಇತರೆ ನಿಧಿಗಳನ್ನು ದುರುಪಯೋಗಪಡಿಸಿಕೊಂಡು ಷೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ವತ್ತುಗಳನ್ನು ಖರೀದಿಸಿರುವುದರಿಂದ ಸದರಿ ಸ್ವತ್ತುಗಳನ್ನು ಸಹಕಾರಿಯ ವಶಕ್ಕೆ ನೀಡಲು ಆದೇಶಿಸಬೇಕೆಂದು ಕೋರಿರುತ್ತಾರೆ.

ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ಹಿತದೃಷ್ಟಿಯಿಂದ ಪ್ರತಿವಾದಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿದ್ದರು.

ಅರ್ಜಿದಾರರು ತಮ್ಮ ದಾವಾ ಅರ್ಜಿಯಲ್ಲಿ ವಾದಿ ಸಹಕಾರಿಯ ಆಡಳಿತ ಮಂಡಳಿಯನ್ನು ರದ್ದುಗೊಳಿಸಿದ್ದು, ಪ್ರತಿವಾದಿಯು ರದ್ದುಗೊಳಿಸಿದ ಸಹಕಾರಿಯ ಆಡಳಿತ ಮಂಡಳಿಯ ಅಧ್ಯಕ್ಷರಾಗಿದ್ದರೆಂದೂ, ಪ್ರತಿವಾದಿಯು ಸಹಕಾರಿಯ ನಿಧಿಗಳಿಂದ ಷೆಡ್ಯೂಲ್ ಸ್ವತ್ತನ್ನು ಖರೀದಿಸಿದ್ದಾರೆಂದು ಅರ್ಜಿಯಲ್ಲಿ ಹೇಳಿ, ಹೀಗೆ ಖರೀದಿಸಿದ ಸದರಿ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡುವ ಸಾಧ್ಯತೆ ಇರುವ ಕಾರಣ ವಿಶೇಷಾಧಿಕಾರಿಗಳು ಸಹಕಾರಿಯ ಸ್ವತ್ತುನ್ನು ಕಾಪಾಡಲು ಷೆಡ್ಯೂಲ್ ಸ್ವತ್ತುನ್ನು ಅರ್ಜಿದಾರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿರುವುದಾಗಿ ಅರ್ಜಿಯಲ್ಲಿ ಹೇಳಿರುತ್ತಾರೆ. ಷೆಡ್ಯೂಲ್ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿದ್ದರು.

ಅರ್ಜಿದಾರರ ಅರ್ಜಿ ಪುರಸ್ಕರಿಸಲು ಯೋಗ್ಯವೆಂಬುದನ್ನು ಮನಗಂಡು ಪ್ರತಿವಾದಿಯು ಸಹಕಾರಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಅವಧಿಯಲ್ಲಿ ಸಹಕಾರಿಯ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆಂದು ಪ್ರತಿವಾದಿಸಿರುವ ಹಿನ್ನೆಲೆಯಲ್ಲಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ದೃಷ್ಟಿಯಿಂದ ದಿನಾಂಕ: 19–02–2016 ರಂದು ಪ್ರತಿವಾದಿಯವರಿಗೆ ಸೇರಿದ ಸ್ಥಿರಾಸ್ತಿಯನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ಉಪಬಂಧಗಳಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶದ ನೋಟೀಸು ನೀಡಿ ಆದೇಶಸಲಾಗಿತ್ತು ಹಾಗೂ ಈ ನೋಟೀಸಿನಲ್ಲಿ ಪ್ರತಿವಾದಿಯು ತನ್ನ ಆಕ್ಷೇಪಣೆ/ವಿವರಣೆ ಸಲ್ಲಿಸಲು ಉದ್ದೇಶಿಸಿದ್ದಲ್ಲಿ ಆ ನೋಟೀಸು ಪಡೆದ 30 ದಿವಸಗಳೊಳಗಾಗಿ ಸಲ್ಲಿಸಲು, ತಪ್ಪಿದಲ್ಲಿ ಸದರಿ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ಸೂಚಿಸಲಾಗಿತ್ತು. ದಿನಾಂಕ: 19–2–2016ರ ನೋಟೀಸಿನಲ್ಲಿ ಸೂಚಿಸಿದಂತೆ ಇದುವರೆವಿಗೂ ಷರತ್ತು ಪಾಲಿಸದೇ ಇರುವ ಹಿನ್ನೆಲೆಯಲ್ಲಿ ಜಪ್ತಿ ಆದೇಶವನ್ನು ಸ್ಥಿರೀಕರಿಸುವುದು ಔಚಿತ್ಯಪೂರ್ಣವಾಗಿರುವ ಕಾರಣ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ದಿನಾಂಕ: 19–02–2016 ರ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ, ಕಲಂ 44ರ ಈ ನ್ಯಾಯಾಲಯದ ನೋಟೀಸಿನಲ್ಲಿ ತಿಳಿಸಿರುವಂತೆ ಪ್ರತಿವಾದಿಯು ತನ್ನ ಆಕ್ಷೇಪಣೆ/ ವಿವರಣೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ದಿನಾಂಕ: 19–02–2016ರ ನೋಟೀಸಿನಲ್ಲಿ ಸೂಚಿಸಿರುವ ಈ ಕೆಳಕಂಡ

ಷೆಡ್ಯೂಲ್ ಸ್ವತ್ತನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರ ರೀತ್ಯಾ ಪ್ರತಿವಾದಿ ಪರಭಾರೆ ಮಾಡಲು ಸಾಧ್ಯವಾಗದಂತೆ ತೀರ್ಪುಪೂರ್ವ ಜಪ್ತಿ ಆದೇಶವನ್ನು ಸ್ವೀಕರಿಸಲಾಗಿದೆ.

**ಷೆಡ್ಯೂಲ್ ಸ್ವತ್ತು :–**

**ಸ್ಥಿರಾಸ್ತಿ :**

| ಕ್ರ.ಸಂ | ಗ್ರಾಮದ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ | ಚಕ್ಕುಬಂದಿ |
|---|---|---|---|---|
| 1 | ಮಾಲೂರು ಟೌನ್, ಕಸಬಾ ಹೋಬಳಿ, ಕೋಲಾರ ಜಿಲ್ಲೆ | Survey No. 182/1 | Measuring 1 Acres 02 Guntas | East by : Same Sy No M P Nagarajus Hissa<br>West by : Same Sy No M.V Ravindras & Others Hissa<br>North by : SLV Layout<br>South by : Thayappas land |
| 2 | ಮಾಲೂರು ಟೌನ್, ಕಸಬಾ ಹೋಬಳಿ, ಕೋಲಾರ ಜಿಲ್ಲೆ | Survey No. 182/2 | Measuring 1 Acres 02 Guntas | East by : M Narayana Reddys land<br>West by : Same Sy No. M P Kodhandarajus Hissa<br>North by : SLV Layout<br>South by : Thayappas land |

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 07/04/2016 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರಿನೊಂದಿಗೆ ನೀಡಲಾಗಿದೆ.

**P.R. 415**
**SC - 5**

ಸಹಕಾರಿಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ:** ಸಮಾಪನೆಯಲ್ಲಿರುವ ಚಿತ್ರಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಚಿತ್ರಹಳ್ಳಿ ಹೊಳಲ್ಕೆರೆ ತಾಲ್ಲೂಕು ಈ ಸಹಕಾರ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72 (3) ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1) ಈ ಕಚೇರಿಯ ಸಮಾಪನೆ ಆದೇಶ ಸಂಖ್ಯೆ:ಡಿಆರ್‌ಡಿ/ಸಮಾಪನೆ/ಸಿಆರ್–/2015–16, ದಿನಾಂಕ:12–08–2015.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂಖ್ಯೆ:ಸನಿ–30 ಸಮಾಪನೆ /ಸಿಆರ್–15/2015–16, ದಿನಾಂಕ: 28–03–2016.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ಚಿತ್ರಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಚಿತ್ರಹಳ್ಳಿ ಹೊಳಲ್ಕೆರೆ ತಾಲ್ಲೂಕು ಈ ಸಹಕಾರ ಸಂಘವನ್ನು ಉಲ್ಲೇಖ (1) ರ ಆದೇಶದನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹೊಳಲ್ಕೆರೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ನಂತರ ಸದರಿ ಸಂಘದ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿಕೊಂಡಿರುತ್ತಾರೆಂದು ಸಹಕಾರ ಅಭಿವೃದ್ಧಿ ಅಧಿಕಾರಿ ಹೊಳಲ್ಕೆರೆ ತಾಲ್ಲೂಕು ಇವರು ತಿಳಿಸಿರುತ್ತಾರೆ. ಹಾಗೂ ಸಂಘದ ಸದಸ್ಯರು ಸಂಘವನ್ನು ಮುನ್ನಡೆಸಿಕೊಂಡು ಹೋಗಲು ಆಸಕ್ತಿ ಹೊಂದಿದ್ದು, ಸಂಘದ ಕಾರ್ಯವ್ಯಾಪ್ತಿಯಲ್ಲಿ ಗ್ರಾಮದ ಜನರಿಗೆ ಕೃಷಿ ಸಾಲ ಸೌಲಭ್ಯ ಹಾಗೂ ಪಡಿತರ ಆಹಾರ, ರಸ ಗೊಬ್ಬರ, ಹಾಗೂ ಬೀಜ, ಮುಂತಾದ ವ್ಯಾಪಾರ ಸೌಲಭ್ಯಗಳನ್ನು ದೊರೆಯಲು ಅನುಕೂಲವಾಗುವುದರಿಂದ ದಿನಾಂಕ: 28–08–2016 ರಂದು ಸಮಾಪನಾಧಿಕಾರಿ ಅಧ್ಯಕ್ಷತೆಯಲ್ಲಿ ಸಂಘದ ಕಾರ್ಯವ್ಯಾಪ್ತಿಯಲ್ಲಿರುವ 150 ಜನ ಸಂಘದ ಸದಸ್ಯರು ಹಾಗೂ ಗ್ರಾಮಸ್ಥರು, ಸಮಾಪನಾಧಿಕಾರಿಗೆ ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿಕೊಂಡಿರುತ್ತಾರೆ ಸದರಿ ಕಾರಣದಿಂದ ಸಮಾಪನಾಧಿಕಾರಿಯು ಸಂಘವನ್ನು ಪುನಃಶ್ಚೇತನಗೊಳಿಸಿಕೊಳ್ಳಲು ಸಹಕಾರ ಸಂಘಗಳ ಸಹಾಯಕ ನಿಬಂಧಕರಿಗೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಯುಕ್ತ, ಸಂಘವನ್ನು ಪುನಃಶ್ಚೇತನಗೊಳಿಸಲು ಹಾಗೂ 5 ವರ್ಷಗಳ ಕ್ರಿಯಾ ಯೋಜನೆ ತಯಾರಿಸಿ, ಕ್ರಿಯಾ ಯೋಜನೆಯನ್ವಯ ಕಾರ್ಯನಿರ್ವಹಿಸುವುದಾಗಿ ತೀರ್ಮಾನ ಕೈಗೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶ ನೀಡುವಂತೆ ವಿನಂತಿಸಿ ಉಲ್ಲೇಖ (2) ರನ್ವಯ ಚಿತ್ರದುರ್ಗ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸದಸ್ಯರ ಹಿತದೃಷ್ಟಿಯಿಂದ ಸದರಿ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಷರತ್ತು ವಿಧಿಸಿ ಆದೇಶ ನೀಡಲಾಗಿದೆ.

## ಆದೇಶ

**ನಂ./ಡಿಆರ್‌ಡಿ/ಪುನಃ/ಸಿಆರ್–01/2016–17, ದಿನಾಂಕ: 21.04.2016.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ಕೆ 1959 ಕಲಂ 72(3) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/39/ಸಿಎಲ್‌ಎಂ/2010, ಬೆಂಗಳೂರು ದಿನಾಂಕ: 17–02–2011 ಪ್ರಕಾರ ದತ್ತವಾದ ಅಧಿಕಾರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸಮಾಪನೆಯಲ್ಲಿರುವ ಚಿತ್ರಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಚಿತ್ರಹಳ್ಳಿ ಹೊಳಲ್ಕೆರೆ ತಾಲ್ಲೂಕು ಇದನ್ನು ಉಲ್ಲೇಖ (1) ರ ಮೇರೆಗೆ ಆದೇಶಿಸಲಾದ ಪರಿಸಮಾಪನಾ ಆದೇಶವನ್ನು ರದ್ದುಪಡಿಸಿ ಈ ದಿನದಿಂದ ಸಂಘವನ್ನು ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆದೇಶಿಸಲಾಗಿದೆ.

**ಷರತ್ತುಗಳು:**

1. ಸಂಘಕ್ಕೆ ಪೂರ್ಣ ಅವಧಿ ಕಾರ್ಯದರ್ಶಿಯವರನ್ನು ನೇಮಕ ಮಾಡಿಕೊಂಡು ಸಂಘದ ವ್ಯವಹಾರವನ್ನು ಸಹಕಾರ ಸಂಘಗಳ ಕಾಯ್ದೆ ಮತ್ತು ಸಂಘದ ಉಪ ನಿಯಮಗಳನ್ವಯ ನಡೆಸಿಕೊಂಡು ಹೋಗತಕ್ಕದ್ದು.
2. ಸಂಘವು ಸಲ್ಲಿಸಿರುವ 5 ವರ್ಷದ ಕ್ರಿಯಾಯೋಜನೆ ರೀತ್ಯಾ ಕಾರ್ಯಕ್ರಮವನ್ನು ರೂಪಿಸಿಕೊಂಡು ಸಂಘದ ಅಭಿವೃದ್ಧಿಗೆ ಕ್ರಮವಿಡುವುದು, ತಪ್ಪಿದಲ್ಲಿ ಸಂಘವನ್ನು ಪುನಃ ಸಮಾಪನೆಗೊಳಿಸಲಾಗುವುದು.
3. ಸಂಘದಲ್ಲಿ ಸದಸ್ಯರನ್ನು ಹೆಚ್ಚಿಸಿ ಷೇರು ಬಂಡವಾಳವನ್ನು ಹೆಚ್ಚಿಸಿಕೊಳ್ಳುವ ಬಗ್ಗೆ ಕ್ರಮವಿಡುವುದು.
4. ಈ ಆದೇಶದ 7 ದಿವಸಗಳಲ್ಲಿ ಸಂಘದ ಚುನಾವಣೆ ನಡೆಸುವ ಬಗ್ಗೆ ಅರ್ಹ ಮತದಾರರ ಪಟ್ಟಿ ಮತ್ತು ಸುಸ್ತಿದಾರರ ಪಟ್ಟಿಯನ್ನು ಮತ್ತು ಚುನಾವಣೆ ಸಂಬಂಧ ಎಲ್ಲಾ ದಾಖಲೆಗಳನ್ನು ಸಿದ್ದಪಡಿಸಿಕೊಂಡು ಚುನಾವಣೆ ಪ್ರಕ್ರಿಯೆ ಜರುಗಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಮುಖಾಂತರ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ: 21-04-2016 ರಂದು ಹೊರಡಿಸುತ್ತೇನೆ.

**PR- 416**
**SC-10**

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಬೆಂಗಳೂರು-18**
**ಸಂಖ್ಯೆ:ಜೆಆರ್‌ಬಿ/ಸಮಾಪನೆ/82/2014-15, ದಿನಾಂಕ: 31-03-2016.**

**ವಿಷಯ:** ಸಮಾಪನೆಯಲ್ಲಿರುವ ಹೊಸನಗರ ತಾಲ್ಲೂಕು ಹಾರ್ಟಿಕಲ್ಚರಲ್ ಪ್ರೊಡ್ಯೂಸ್ ಅಂಡ್ ಮಾರ್ಕೆಟಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಪುರಪ್ಪೆಮನೆ, ಹೊಸನಗರ ಈ ಸಂಘದ ನೋಂದಣಿಯನ್ನು ರದ್ದು ಮಾಡುವ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/ಸಿಆರ್-2024/14-15, ದಿನಾಂಕ:20-02-2016 ಮತ್ತು 11-09-2014..
2) ಈ ಕಛೇರಿಯ ಸಮಸಂಖ್ಯೆ ಆದೇಶ ದಿನಾಂಕ:20-09-2014.
3) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಡಿಆರ್‌ಎಸ್/ಎಲ್‌ಕ್ಯೂಡಿ/ಸಿಆರ್-2258/2015-16, ದಿನಾಂಕ: 21-03-2016.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ಹೊಸನಗರ ತಾಲ್ಲೂಕು ಹಾರ್ಟಿಕಲ್ಚರಲ್ ಪ್ರೊಡ್ಯೂಸ್ ಅಂಡ್ ಮಾರ್ಕೆಟಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಪುರಪ್ಪೆಮನೆ, ಹೊಸನಗರ ಈ ಸಹಕಾರ ಸಂಘವು ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಆದೇಶ ಸಂಖ್ಯೆ:ಡಿಆರ್‌ಎಸ್/667/ 1960-61, ದಿನಾಂಕ:29-12-1961 ರಂದು ನೋಂದಣಿಯಾಗಿರುತ್ತದೆ. ಸಂಘವು ತಾಲ್ಲೂಕು ಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ. ಸಹಕಾರ ಸಂಘವು ನೋಂದಣಿಯಾದ ನಂತರ ಸಂಘದ ಉಪನಿಯಮಗಳ ಉದ್ದೇಶಗಳಿನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಉಲ್ಲೇಖ(2)ರ ಈ ಕಛೇರಿಯ ಆದೇಶದನ್ವಯ ಸಹಕಾರ ಸಂಘವನ್ನು ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸನಗರ ಇವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ. ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು ಆಸ್ತಿ ಜವಾಬ್ದಾರಿಗಳ ವಿಲೇವಾರಿಗಾಗಿ ಈ ಕಛೇರಿಯಿಂದ ದಿ:03-03-2016ರ ಆದೇಶದಂತೆ ಆದ್ಯತ್ಯಾ ಪಟ್ಟಿ ಅನುಮೋದನೆ ಪಡೆದಿರುತ್ತಾರೆ. ಅನುಮೋದಿತ ಆದ್ಯತಾ ಪಟ್ಟಿಗನುಸಾರವಾಗಿ ಸಂಘದ ಲೆಕ್ಕ ಪುಸ್ತಕಗಳನ್ನು ಬರೆದು 2010-11ನೇ ಸಾಲಿನವರೆಗೆ ಲೆಕ್ಕ ಪುಸ್ತಕಗಳನ್ನು ಆಡಿಟ್ ಮಾಡಿಸಿರುತ್ತಾರೆ. ಹಾಗೂ 2011-12, 2012-13, 2013-14 ಮತ್ತು 2014-15ನೇ ಸಾಲಿನಲ್ಲಿ ಯಾವುದೇ ವ್ಯವಹಾರಗಳು ಸಂಘದಲ್ಲಿ ನಡೆದಿರುವುದಿಲ್ಲ ಎಂದು ಸಂಘದ ಸಮಾಪನಾಧಿಕಾರಿ ಆರ್ಥಿಕ ತಃಖ್ತೆಗಳನ್ನು ದೃಢೀಕರಿಸಿ, ಸಲ್ಲಿಸಿರುತ್ತಾರೆ. ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ದಿನಾಂಕ:17-02-2016ರಂದು ನಡೆದ ಅಂತಿಮ ಸಭೆಯಲ್ಲಿ ನಿರ್ಣಯ ಕೈಗೊಂಡು, ಅದರಂತೆ ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಿರುತ್ತಾರೆ ದಿ:17-02-2016ಕ್ಕೆ ಆಸ್ತಿ-ಜವಾಬ್ದಾರಿ ತಃಖ್ತೆ ಶೂನ್ಯವಾಗಿರುತ್ತದೆ. ಮತ್ತು ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ ಪ್ರಸ್ತಾವನೆಯನ್ನು ಉಲ್ಲೇಖ(3)ರ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗರವರು ಸಲ್ಲಿಸಿದ್ದು. ಸದರಿ ಪ್ರಸ್ತಾವನೆಯನ್ನು ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ಶಿಫಾರಸ್ಸು ಮತ್ತು ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರ ಶಿಫಾರಸ್ಸು ಹಾಗೂ ದಿ:17-02-2016ರಂದು ನಡೆಸಿದ ಸಮಾಪನಾಧಿಕಾರಿ ಸಭೆಯ ನಡವಳಿ ಮತ್ತು ಶೂನ್ಯಗೊಳಿಸಿದ ಆಸ್ತಿ ಜವಾಬ್ದಾರಿ ತಃಖ್ತೆಗಳನ್ನು ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ/139/ಸಿಎಲ್‌ಎಂ/2010, ದಿನಾಂಕ:17-02-2011 ರನ್ವಯ ಡಿ. ಪಾಂಡುರಂಗ ಗರಗ್. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಮಸಾಪನೆಗೊಂಡಿದ್ದ **ತಾಲ್ಲೂಕು ಹಾರ್ಟಿಕಲ್ಚರಲ್ ಪ್ರೊಡ್ಯೂಸ್ ಅಂಡ್ ಮಾರ್ಕೆಟಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಪುರಪ್ಪಮನೆ,** ಹೊಸನಗರ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ:ಡಿಆರ್‌ಎಸ್/667/1960-61 ದಿನಾಂಕ: 29-12-1961ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು, ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಒ)ರನ್ವಯ 3 ವರ್ಷಗಳ ಕಾಲ ಸಹಕಾರ

ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು. ಇದರ ನೋಂದಣಿ ರದ್ದತಿಯಿಂದ ಆಸ್ತಿ ಜವಾಬ್ದಾರಿ ವಿಲೇ ಮಾಡದೆ ಹಾಗೆ ಇದ್ದಲ್ಲಿ ಸಂಘದ ಸಮಾಪನಾಧಿಕಾರಿಯು ಸಂಪೂರ್ಣ ಜವಾಬ್ದಾರರಾಗಿರುತ್ತಾರೆಂದು ಸಹ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ-ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:31-03-2016 ರಂದು ನೀಡಲಾಗಿದೆ.

**P.R. 417**
**SC-10**

ಡಿ.ಪಾಂಡುರಂಗ ಗರಗ್
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಬೆಂಗಳೂರು-18

**ಸಂಖ್ಯೆ:ಜೆಆರ್‌ಬಿ/ಎಲ್‌ಕ್ಯೂಡಿ/55/ಎಲ್‌ಎಂಸಿ/97-98, ದಿನಾಂಕ: 31-03-2016.**

**ವಿಷಯ:** ಸಮಾಪನೆಯಲ್ಲಿರುವ ಸಾಗರ ತಾಲ್ಲೂಕು ಗ್ರಾಮಾಂತರ ಕೈಗಾರಿಕಾ ಸಹಕಾರ ಸಂಘ ನಿ., ಸಾಗರ ಈ ಸಂಘದ ನೋಂದಣಿಯನ್ನು ರದ್ದು ಮಾಡುವ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಡಿಆರ್‌ಎಸ್/ಕಾ.3/ಡಿಎಲ್‌ಎಸ್/101/97-98, ದಿನಾಂಕ: 26-02-1998.
2) ಈ ಕಛೇರಿಯ ಆದೇಶದ ದಿನಾಂಕ:27-05-1998.
3) ಈ ಕಛೇರಿಯ ಸಮ ಸಂಖ್ಯೆಯ ಆದೇಶ ದಿನಾಂಕ:10-03-2014.
4) ಈ ಕಛೇರಿಯ ಸಮ ಸಂಖ್ಯೆಯ ಪತ್ರ ದಿನಾಂಕ:03-03-2015.
5) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಡಿಆರ್‌ಎಸ್/ಕಾನೂನು-3/ ಡಿಎಲ್‌ಎಸ್/51/2000-01, ದಿನಾಂಕ: 29-03-2016.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ಸಾಗರ ತಾಲ್ಲೂಕು ಗ್ರಾಮಾಂತರ ಕೈಗಾರಿಕಾ ಸಹಕಾರ ಸಂಘ ನಿ., ಸಾಗರ ಈ ಸಹಕಾರ ಸಂಘವು ಆದೇಶ ಸಂಖ್ಯೆ:ಎಆರ್‌ಎಸ್-1075/54-55, ದಿನಾಂಕ:24-11-1954ರಂದು ನೋಂದಣಿಯಾಗಿರುತ್ತದೆ. ಸಂಘದ ಮುಖ್ಯಕಾರ್ಯವ್ಯಾಪ್ತಿಯು ಪೂರ್ಣ ಸಾಗರ ತಾಲ್ಲೂಕು ವ್ಯಾಪ್ತಿ ಹೊಂದಿರುತ್ತದೆ. ಸಹಕಾರ ಸಂಘವು ನೋಂದಣಿಯಾದ ನಂತರ ಸಂಘದ ಉಪನಿಯಮಗಳ ಉದ್ದೇಶಗಳಿನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಉಲ್ಲೇಖ(2)ರ ಈ ಕಛೇರಿಯ ಆದೇಶದನ್ವಯ ದಿನಾಂಕ:27-05-1998ರಂದು ಸಹಕಾರ ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿಯನ್ನು ನೇಮಕ ಮಾಡಿದೆ. ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿಗಾಗಿ ಈ ಕಛೇರಿಯಿಂದ ಉಲ್ಲೇಖ(4)ರಲ್ಲಿ ಆದ್ಯತಾ ಪಟ್ಟಿಗೆ ಅನುಮೋದನೆ ಪಡೆದಿರುತ್ತಾರೆ. ಈ ನಡುವೆ ಉಲ್ಲೇಖ(3)ರಲ್ಲಿ ಸಮಾಪನಾಧಿಕಾರಿ ಸಂಘದ ಚರಾಸ್ತಿಗಳ ವಿಲೇವಾರಿಗೆ ಈ ಕಛೇರಿಯಿಂದ ಅನುಮತಿ ಪಡೆದಿರುತ್ತಾರೆ. ಅನುಮೋದಿತ ಆದ್ಯತಾ ಪಟ್ಟಿಗನುಸಾರವಾಗಿ ಸಂಘಧ ಲೆಕ್ಕ ಪುಸ್ತಕಗಳನ್ನು ಬರೆದು 2011-12ನೇ ಸಾಲಿನವರೆಗೆ ಲೆಕ್ಕಪುಸ್ತಕಗಳನ್ನು ಆಡಿಟ್ ಮಾಡಿಸಿರುತ್ತಾರೆ. ನಂತರದಲ್ಲಿ ಸಂಘದಲ್ಲಿ ಯಾವುದೇ ವ್ಯವಹಾರ ನಡೆದಿರುವುದಿಲ್ಲ. ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ದಿನಾಂಕ:21-03-2014ರಂದು ನಡೆದ ಅಂತಿಮ ಸಭೆಯಲ್ಲಿ ನಿರ್ಣಯ ಕೈಗೊಂಡು, ಅದರಂತೆ ಸಂಘದ ಆಸ್ತಿ-ಜವಾಬ್ದಾರಿಯನ್ನು ವಿಲೇವಾರಿ ಮಾಡಿರುತ್ತಾರೆ. ದಿ:22-03-2014ಕ್ಕೆ ಆಸ್ತಿ-ಜವಾಬ್ದಾರಿ ತಃಖ್ತೆ ಶೂನ್ಯವಾಗಿರುತ್ತದೆ. ಮತ್ತು ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ ಪ್ರಸ್ತಾವನೆಯನ್ನು ಉಲ್ಲೇಖ(5)ರ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗರವರು ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯನ್ನು ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ಶಿಫಾರಸ್ಸು ಮತ್ತು ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರ ಶಿಫಾರಸ್ಸು ಹಾಗೂ ದಿ:21-03-2014ರಂದು ನಡೆಸಿದ ಸಮಾಪನಾಧಿಕಾರಿ ಸಭೆಯ ನಡವಳಿ ಮತ್ತು ಶೂನ್ಯಗೊಳಿಸಿದ ಆಸ್ತಿ ಜವಾಬ್ದಾರಿ ತಃಖ್ತೆಗಳನ್ನು ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ. ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/139/ಸಿಎಲ್‌ಎಂ/2010, ದಿನಾಂಕ:17-02-2011 ರನ್ವಯ ಡಿ. ಪಾಂಡುರಂಗ ಗರಗ್. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಮಾಪನೆಗೊಂಡಿದ್ದ **ಸಾಗರ ತಾಲ್ಲೂಕು ಗ್ರಾಮಾಂತರ ಕೈಗಾರಿಕಾ ಸಹಕಾರ ಸಂಘ ನಿ., ಸಾಗರ,** ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್‌ಎಸ್-1075/54-55, ದಿನಾಂಕ: 24-11-1954ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು, ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಒ)ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು. ಇದರ ನೋಂದಣಿ ರದ್ದತಿಯಿಂದ ಆಸ್ತಿ ಜವಾಬ್ದಾರಿ ವಿಲೇ ಮಾಡದೆ ಹಾಗೆ ಇದ್ದಲ್ಲಿ ಸಂಘದ ಸಮಾಪನಾಧಿಕಾರಿಯು ಸಂಪೂರ್ಣ ಜವಾಬ್ದಾರರಾಗಿರುತ್ತಾರೆಂದು ಸಹ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ-ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:31-03-2016 ರಂದು ನೀಡಲಾಗಿದೆ.

**P.R. 418**
**SC-10**

ಡಿ.ಪಾಂಡುರಂಗ ಗರಗ್
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ಸಂಖ್ಯೆ: ಸಿಐ 180 ಎಸ್‌ಪಿಕ್ಯೂ 2016 ಬೆಂಗಳೂರು, ದಿನಾಂಕ: 18/20.06.2016**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(4) ರಡಿ ಅಧಿಸೂಚನೆ**

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕದ ಕಾಯ್ದೆ ಸಂಖ್ಯೆ: 18) ವಿಧಿ 28(1) ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕ: 26.11.2015 ರಂದು ಕರ್ನಾಟಕದ ವಿಶೇಷ ರಾಜ್ಯ ಪತ್ರ ಭಾಗ–3 ಪತ್ರಿಕೆ ಮಟ ಸಂಖ್ಯೆ 4496 ರಿಂದ 4516 ರಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ: ಸಿಐ 111 ಎಸ್‌ಪಿಕ್ಯೂ 2015, ಬೆಂಗಳೂರು ದಿನಾಂಕ: 13.11.2015ರ ಪ್ರಕಾರ ಸರ್ಕಾರದಲ್ಲಿ ಸದರಿ ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಸ್ವತ್ತುಗಳ ಪ್ರದೇಶವನ್ನು **"ಬೆಂಗಳೂರು ಮೆಟ್ರೋ ರೈಲು ಯೋಜನೆಯ"** ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲು ಇಚ್ಛೆಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಉದ್ದೇಶಕ್ಕೆ ಸ್ವಾಧೀನಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ. ಈ ಬಗ್ಗೆ ಮೇಲ್ಕಂಡ ಕಾಯ್ದೆ ವಿಧಿ 28(3) ರ ಪ್ರಕಾರ ಆದೇಶ ಹೊರಡಿಸಲಾಗಿದೆ.

ಆದುದರಿಂದ 1966 ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(4) ರ (1966 ರ ಕರ್ನಾಟಕದ ಕಾಯ್ದೆ ಸಂಖ್ಯೆ: 18) ಮೇರೆಗೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರ ಈ ಕೆಳಗೆ ನಮೂದಿಸಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ತಿಳಿಸಲಾಗಿರುವ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗಿದೆಯೆಂದು ಈ ಮೂಲಕ ಘೋಷಿಸಲಾಗಿದೆ.

| ಕ್ರ. ಸ. | ಗುರುತಿನ ಸಂಖ್ಯೆ | ಖಾತಾದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. / ಹಿಸ್ಸಾ ನಂ. | ಸ್ವತ್ತಿನ ಸಂಖ್ಯೆ / ಖಾತಾ ಸಂ | ಸ್ವತ್ತಿನ ಒಟ್ಟು ವಿಸ್ತೀರ್ಣ | ಭೂಸ್ವಾಧೀನಕ್ಕೆ ಒಳಪಟ್ಟ ವಿಸ್ತೀರ್ಣ (ಚ.ಮೀ.) | ಚಕ್ಕುಬಂದಿ | | | | ಕಟ್ಟಡ ವಿನ್ಯಾಸ ಗಳ ವಿವರ ಗಳು |
|---|---|---|---|---|---|---|---|---|---|---|---|---|
| | | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| ವಾರ್ಡ್ ನಂ: 159 | | ವಾರ್ಡ್ ಹೆಸರು: ಕೆಂಗೇರಿ | | ಗ್ರಾಮ : ಕೆಂಗೇರಿ | | ಹೋಬಳಿ : ಕೆಂಗೇರಿ | | ತಾಲ್ಲೂಕು : ಬೆಂಗಳೂರು ದಕ್ಷಿಣ | | ಜಿಲ್ಲೆ : ಬೆಂಗಳೂರು ನಗರ | | |
| ವಯಾಡಕ್ಟ್ ಪ್ರದೇಶ (ಪಿ–678 ರಿಂದ ಪಿ–686) | | | | | | | | | | | | |
| 1. | R2E–88A R2E–90 | ಕೆಂಪಯ್ಯ.ಸಿ. ಬಿನ್ ಚೆನ್ನಣ್ಣ ಲೀಲಾವತಿ ಕೋಂ ಲೇಟ್ ಶ್ರೀರಾಮ್.ಕೆ, ಕೆ. ಅರಸಪ್ಪ ಬಿನ್ ಕೆಂಪಯ್ಯ | ಎಸ್.ಎಸ್.ಬಿ ಹೋಟೆಲ್, ಓಂ ಶಕ್ತಿ ಟ್ರೈಲರ್ಸ್, ಪೀಠೋಪಕರಣಗಳ ಕಛೇರಿ, ಕಛೇರಿ ಹಾಗೂ 8 ಮನೆಗಳು | 106/3ರ ಪೈಕಿ | ಎಂಆರ್ 71/2008–09 | 7385.41 | 470.81 | ಭಾಗ್ಯಮ್ಮ ಮತ್ತು ಕೆಂಪಣ್ಣ ರವರ ಸ್ವತ್ತು | ಕಮಲ ಮತ್ತು ವೆಂಕಟೇಶ್ ಇವರುಗಳ ಸ್ವತ್ತು | ಮೈಸೂರು–ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಜಿ+3 ಆರ್.ಸಿ.ಸಿ ಕಟ್ಟಡ |
| 2. | R2E–91 | ಕೆ.ಎಸ್. ವೆಂಕಟೇಶ್ ಬಿನ್ ಲೇಟ್ ಸಂಜೀವಪ್ಪ, ವಿ. ಕಮಲ ಕೋಂ ನಾಗರಾಜು | ಅನ್ನಪೂರ್ಣ ಲಾಡ್ಜ್, ವರುಣ್ ಕಾಂಡಿಮೆಂಟ್ಸ್, ವಿ. ಕಮಲ ಕೋಂ ನಾಗರಾಜು | 106/2 ಪೈಕಿ | 3507/731/490 | 100.33 | 75.34 | ಕೆಂಪಯ್ಯ ರವರ ಸ್ವತ್ತು | ರಸ್ತೆ | ಮೈಸೂರು–ಬೆಂಗಳೂರು ರಸ್ತೆ | ಎಸ್. ಮಂಜುಳ ರವರ ಸ್ವತ್ತು | ಸೆಲ್ಲರ್+ 4 ಆರ್.ಸಿ.ಸಿ ಕಟ್ಟಡ, ಖಾಲಿ ಜಾಗ |
| 3. | R2E–92 R2E–93 | ಎಸ್.ಮಂಜುಳ | ಎಸ್. ಮಂಜುಳ | 106/2 ಪೈಕಿ | 3830/1/3507/731/490 | 123.56 | 82.79 | ಕೆಂಪಯ್ಯ ರವರ ಸ್ವತ್ತು | ರಸ್ತೆ | ಕೆ.ಎಸ್. ವೆಂಕಟೇಶ್ ಮತ್ತು ಕಮಲ ರವರ ಸ್ವತ್ತು | ಉಳಿಕೆ ಸ್ವತ್ತು | ಖಾಲಿ ಜಾಗ ಮತ್ತು ಎ.ಸಿ. ಶೀಟ್ ಕಟ್ಟಡ |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 4. | R2E–94 | ಡಾ॥ ಎ.ಹೆಚ್. ಲೋಕೇಶ್ ಬಿನ್ ಹನುಮಂತಯ್ಯ ಅಲಿಯಾಸ್ ಕೆಂದಪ್ಪ | ಹೆಚ್.ಕೆ. ಆಸ್ಪತ್ರೆ, ಮೆಡಿಕಲ್ ಸ್ಟೋರ್ಸ್ | 106/2 ಪೈಕಿ | 4044/1/3693/ 106/2/1 | 452.24 | 115.06 | ರಸ್ತೆ | ಯಶೋದಮ್ಮ ರವರ ಸ್ವತ್ತು | ಮೈಸೂರು– ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಸೆಲ್ಲರ್ + 3 ಆರ್‌ಸಿಸಿ ಕಟ್ಟಡ, ಎಲೆಕ್ಟ್ರಿಕಲ್ ಸಬ್ ಸ್ಟೇಷನ್ |
| 5. | R2E–100 | ಯಶೋದಮ್ಮ ಕೋಂ ಲೇಟ್ ಕೆ.ಜಿ. ಮಂಜುನಾಥ್ | ಯಶೋದಮ್ಮ ಕೋಂ ಲೇಟ್ ಕೆ.ಜಿ. ಮಂಜುನಾಥ್ | 106/2ರ ಪೈಕಿ | 1168/889/1/ 558/1 ಎಂಆರ್‌ಹೆಚ್ 24/2013–14 | 1932.37 | 112.22 | ಡಾ॥ ಎ.ಹೆಚ್. ಲೋಕೇಶ್ ರವರ ಸ್ವತ್ತು | ಗೋಪಾಲ ಕೃಷ್ಣ ರವರ ಸ್ವತ್ತು | ಮೈಸೂರು– ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಖಾಲಿ ಜಾಗ |
| 6. | R2E–101 | ಕೆ.ಜಿ. ಗೋಪಾಲಕೃಷ್ಣ | ಕೆ.ಜಿ. ಗೋಪಾಲಕೃಷ್ಣ | 106/2 ಪೈಕಿ | ಎಂಆರ್ 35/94–95 | 2023.45 | 22.68 | ಯಶೋದಮ್ಮ ರವರ ಸ್ವತ್ತು | ಡಾ॥ ಸವಿತಾ ರವರ ಸ್ವತ್ತು | ಮೈಸೂರು– ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಖಾಲಿ ಜಾಗ |
| | | | | | | ಒಟ್ಟು (ಎ) | **878.90** | | | | | |
| **ವಾರ್ಡ್ ನಂ: 159** | | **ವಾರ್ಡ್ ಹೆಸರು: ಕೆಂಗೇರಿ** | | **ಗ್ರಾಮ : ಕೆಂಗೇರಿ** | | **ಹೋಬಳಿ : ಕೆಂಗೇರಿ** | | **ತಾಲ್ಲೂಕು : ಬೆಂಗಳೂರು ದಕ್ಷಿಣ** | | | **ಜಿಲ್ಲೆ : ಬೆಂಗಳೂರು ನಗರ** | |
| **ಕೆಂಗೇರಿ ನಿಲ್ದಾಣ (ಪಿ–686 ಮತ್ತು ಪಿ–687)** | | | | | | | | | | | | |
| 7. | R2E–108 | 1) ಅರ್ಜುನ್ ಹೀರ್‌ಜೀ ಪಟೇಲ್ ಬಿನ್ ಹೀರ್‌ಜೀ ಪಟೇಲ್ 2) ಸೋಮ್‌ಜೀ ಹೀರ್‌ಜೀ ಪಟೇಲ್ ಬಿನ್ ಹೀರ್‌ಜೀ ಪಟೇಲ್ | 1) ಅರ್ಜುನ್ ಹೀರ್‌ಜೀ ಪಟೇಲ್ ಬಿನ್ ಹೀರ್‌ಜೀ ಪಟೇಲ್ 2) ಸೋಮ್‌ಜೀ ಹೀರ್‌ಜೀ ಪಟೇಲ್ ಬಿನ್ ಹೀರ್‌ಜೀ ಪಟೇಲ್ | 106/2 ಪೈಕಿ | ಎಂಆರ್ 4/2001–02 | 1214.04 | 38.07 | ಅಣ್ಣಮ್ಮ ಮತ್ತು ಶಿವಲಿಂಗ ಮೂರ್ತಿ ರವರ ಸ್ವತ್ತು | ಲೀಲಾವತಿ ರವರ ಸ್ವತ್ತು | ಮೈಸೂರು– ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಖಾಲಿ ಜಾಗ |
| 8. | R2E–107 | ಲೀಲಾವತಿ ಕೋಂ ಲೇಟ್ ಶ್ರೀರಾಮ್.ಕೆ | ಶ್ರೀ ಲಕ್ಷ್ಮೀ ಮಾರ್ಬಲ್ಸ್ ಮತ್ತು ಗ್ರಾನೈಟ್ಸ್ | 106/10 | ಎಂ.ಆರ್ 71/2008–09 ವಿಭಾಗ 20.06.2009 ಎಂ.ಆರ್.ಹೆಚ್ 8/2012–13, 17.10.2012. | 7891.26 | 190.97 | ಅರ್ಜುನ್ ಹೀರ್‌ಜೀ ಪಟೇಲ್ ಇವರ ಸ್ವತ್ತು | ರಸ್ತೆ | ಮೈಸೂರು– ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಖಾಲಿ ಜಾಗ, ಎ.ಸಿ.ಶೀಟ್ ಕಟ್ಟಡ ಮತ್ತು ಕಾಂಪೌಂಡ್ |
| 9. | R2E–106 | ಭಾಗ್ಯಮ್ಮ ಕೋಂ ಅರಸಪ್ಪ.ಕೆ | ಭಾಗ್ಯಮ್ಮ ಕೋಂ ಅರಸಪ್ಪ.ಕೆ | 106/9 | | | 120.75 | ರಸ್ತೆ | ಅರಸಪ್ಪ ರವರ ಸ್ವತ್ತು | ಮೈಸೂರು– ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಖಾಲಿ ಜಾಗ |
| 10. | R2E–105 & 106 | ಕೆ. ಅರಸಪ್ಪ ಬಿನ್ ಕೆಂಪಯ್ಯ, | ಕೆ. ಅರಸಪ್ಪ ಬಿನ್ ಕೆಂಪಯ್ಯ, | 106/8 | | | 25.54 109.56 **135.10** | ಭಾಗ್ಯಮ್ಮ ಇವರ ಸ್ವತ್ತು | ಲಕ್ಷ್ಮೀ ನಾರಾಯಣ ರಾಜು ರವರ ಸ್ವತ್ತು | ಮೈಸೂರು– ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಖಾಲಿ ಜಾಗ ಮತ್ತು ಶಿಥಿಲವಾದ ಕಟ್ಟಡ |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 11. | R2E–105 | ಲಕ್ಷ್ಮೀ ನಾರಾಯಣರಾಜು ಬಿನ್ ಮುನಿರಾಜು | ಕೆಂಗೇರಿ ಸ್ಟೀಲ್ / ಮೆಟ್ರೋ ಐರನ್ ಸ್ಟೀಲ್ ಅಂಗಡಿ | 106/6 | 125/1/106/6 | | 66.56 | ಅರಸಪ್ಪ ರವರ ಸ್ವತ್ತು | ನಾಗರತ್ನಮ್ಮ ರವರ ಸ್ವತ್ತು | ಮೈಸೂರು–ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಎ.ಸಿ.ಶೀಟ್ ಕಟ್ಟಡ |
| 12. | | ನಾಗರತ್ನಮ್ಮ ಕೋಂ ಕೆ.ನರಸೇಗೌಡ | ಎಸ್.ಹೆಚ್ ಪಟೇಲ್ ವುಡ್ ಇಂಡಸ್ಟ್ರೀಸ್ | 106/5 | ಎಂ.ಆರ್ 71/2008–09 ವಿಭಾಗ 20.06.2009 ಎಂ.ಆರ್.ಹೆಚ್ 8/2012–13, 17.10.2012. | | 63.37 | ಲಕ್ಷ್ಮಿನಾರಾಯಣರಾಜು ರವರ ಸ್ವತ್ತು | ಜಯಮ್ಮ ರವರ ಸ್ವತ್ತು | ಮೈಸೂರು–ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಕಟ್ಟಡ |
| 13. | | ಜಯಮ್ಮ ಕೋಂ ಲೇಟ್ ನಂಜಪ್ಪ | ಅನ್ನಪೂರ್ಣೇಶ್ವರಿ ಟಿಫಿನ್ ಸೆಂಟರ್, ಸಾಗರ್ ವೈನ್ಸ್ | 106/4 | | | 34.84 | ನಾಗರತ್ನಮ್ಮ ರವರ ಸ್ವತ್ತು | ರಸ್ತೆ | ಮೈಸೂರು–ಬೆಂಗಳೂರು ರಸ್ತೆ | ಉಳಿಕೆ ಸ್ವತ್ತು | ಶೀಟ್ ಕಟ್ಟಡ |
| 14. | R2E–103 | ಕರ್ಶನ್ ಪಟೇಲ್,<br>ಶಾಂತಿಲಾಲ್ ಪಟೇಲ್,<br>ಜೀವರಾಜ್ ಪಟೇಲ್ | ಪಂಚರ್ ಶಾಪ್ | 133/2ಬಿ ಪೈಕಿ | 4709/1371 /2/133/2/133/ 2ಬಿ,4708/1370/ 133/2/133/2ಬಿ, 4710/1372/ 133/2/133/2ಬಿ | 303.51<br>1821.06<br>303.51 | 642.34 | ಶ್ಯಾಮ್‌ಜಿ ಆರ್. ಪಟೇಲ್ ರವರ ಸ್ವತ್ತು | ಉಳಿಕೆ ಸ್ವತ್ತು | ಉಳಿಕೆ ಸ್ವತ್ತು | ಮೈಸೂರು–ಬೆಂಗಳೂರು ರಸ್ತೆ | ಶೆಡ್ |
| 15. | R2E–104A | ಶ್ಯಾಮ್‌ಜಿ ಆರ್. ಪಟೇಲ್ | ಶಕ್ತಿ ಟಿಂಬರ್ ಮಾರ್ಟ್ | 133/2ಎ ಪೈಕಿ | 2932/2591/ 1106/133/2ಎ, 2930/2589 /1104/133/2ಎ | 2832.76 | 218.88 | ಹರಿಲಾಲ್ ಆರ್. ಪಟೇಲ್ ರವರ ಸ್ವತ್ತು | ಕರ್ಶನ್ ಪಟೇಲ್ ಮತ್ತು ಇತರರ ಸ್ವತ್ತು | ಉಳಿಕೆ ಸ್ವತ್ತು | ಮೈಸೂರು–ಬೆಂಗಳೂರು ರಸ್ತೆ | ಸೆಲರ್, ಮೆಟ್ಟಿಲು, ಕಟ್ಟಡ ಎ.ಸಿ.ಶೀಟ್ ಕಟ್ಟಡ, |
| 16. | R2E–104 | ಹರಿಲಾಲ್ ಆರ್. ಪಟೇಲ್ ಬಿನ್ ರಾಮ್‌ಜಿ ಪಟೇಲ್ | ಶಿವಶಕ್ತಿ ಸಾಮಿಲ್ | 133/2ಎ ಪೈಕಿ | ಎಂ.ಆರ್. 29/94–95 | 1972.81 | 239.67 | ಉಳಿಕೆ ಸ್ವತ್ತು | ಶ್ಯಾಮ್‌ಜಿ. ಆರ್ ಪಟೇಲ್‌ರವರ ಸ್ವತ್ತು | ಉಳಿಕೆ ಸ್ವತ್ತು | ಮೈಸೂರು–ಬೆಂಗಳೂರು ರಸ್ತೆ | ಕಟ್ಟಡ, ಎ.ಸಿ. ಶೀಟ್ ಕಟ್ಟಡ |
| | | | | | | **ಒಟ್ಟು (ಬಿ)** | **1750.55** | | | | | |
| **ವಾರ್ಡ್ ನಂ: 159 ವಾರ್ಡ್ ಹೆಸರು: ಕೆಂಗೇರಿ ಗ್ರಾಮ : ಕೆಂಗೇರಿ ಹೋಬಳಿ : ಕೆಂಗೇರಿ ತಾಲ್ಲೂಕು : ಬೆಂಗಳೂರು ದಕ್ಷಿಣ ಜಿಲ್ಲೆ : ಬೆಂಗಳೂರು ನಗರ** | | | | | | | | | | | | |
| **ವಯಾಡಕ್ಟ್ ಪ್ರದೇಶ (ಪಿ–697 ಮತ್ತು ಪಿ–698)** | | | | | | | | | | | | |
| 17. | R2E–109 & 110 | ಕೆ.ಎಂ.ಎಸ್. ಕೋಚ್ ಬಿಲ್ಡರ್ಸ್ ಪ್ರೈ.ಲಿ. | ಕೆ.ಎಂ.ಎಸ್. ಕೋಚ್ ಬಿಲ್ಡರ್ಸ್ ಪ್ರೈ.ಲಿ. | 137/3 ಪೈಕಿ | 1069/814/ 1/45/1/137/3 | 6171.37 | 49.55<br>3.00(ಖ)<br>**52.55** | ಉಳಿಕೆ ಸ್ವತ್ತು | ಉಳಿಕೆ ಸ್ವತ್ತು | ಉಳಿಕೆ ಸ್ವತ್ತು | ಮೈಸೂರು–ಬೆಂಗಳೂರು ರಸ್ತೆ | ಖಾಲಿ ಜಾಗ ಮತ್ತು ಕಾಂಪೌಂಡ್ |
| | | | | | | **ಒಟ್ಟು (ಸಿ)** | **52.55** | | | | | |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| ಗ್ರಾಮ : ಹೊಸಕೆರೆಹಳ್ಳಿ | | | ಹೋಬಳಿ : ಉತ್ತರಹಳ್ಳಿ–4 | | | | ತಾಲ್ಲೂಕು : ಬೆಂಗಳೂರು ದಕ್ಷಿಣ | | | | ಜಿಲ್ಲೆ : ಬೆಂಗಳೂರು ನಗರ | |
| ಎಲೆಕ್ಟ್ರಿಕಲ್ ಯುಟಿಲಿಟಿ ಶಿಫ್ಟಿಂಗ್ | | | | | | | | | | | | |
| 18. | R2E– 116A | ಭಾರತಿ ಕೋಂ ಪ್ರಸಾದ್ ಬಾಬು | ಭಾರತಿ ಕೋಂ ಪ್ರಸಾದ್ ಬಾಬು | 60/1 ಪೈಕಿ | ಎಂ.ಆರ್ 46/ 2004–05 | 6381.08 | 144.00 | ಉಳಿಕೆ ಸ್ವತ್ತು | ಉಳಿಕೆ ಸ್ವತ್ತು | ಉಳಿಕೆ ಸ್ವತ್ತು | ಉಳಿಕೆ ಸ್ವತ್ತು | ಖಾಲಿ ಜಾಗ |
| | | | | | | ಒಟ್ಟು (ಡಿ) | **144.00** | | | | | |
| | | | | | | ಒಟ್ಟು (ಎ ಯಿಂದ ಡಿ) | **2826.00** | | | | | |

**ಘೋಷ್ವಾರೆ**

| ಕ್ರ. ಸಂ. | ಗ್ರಾಮದ ಹೆಸರು | ಹೋಬಳಿ | ತಾಲ್ಲೂಕು | ವಯಾಡಕ್ಟ್ ಪ್ರದೇಶ (ಚ.ಮೀ) | ಸ್ಟೇಷನ್ (ಚ.ಮೀ) | ಡಿಪ್ಪೋ ಎರಿಯಾ (ಚ.ಮೀ) | ಎಲೆಕ್ಟ್ರಿಕಲ್ ಯುಟಿಲಿಟಿ ಶಿಫ್ಟಿಂಗ್ | ಒಟ್ಟು ವಿಸ್ತೀರ್ಣ (ಚ.ಮೀ. ಗಳಲ್ಲಿ) |
|---|---|---|---|---|---|---|---|---|
| 1 | ಕೆಂಗೇರಿ | ಕೆಂಗೇರಿ | ಬೆಂಗಳೂರು ದಕ್ಷಿಣ | 878.90 | 1750.55 | – | – | 2629.45 |
| 2 | ಕೆಂಗೇರಿ | ಕೆಂಗೇರಿ | ಬೆಂಗಳೂರು ದಕ್ಷಿಣ | 52.55 | – | – | – | 52.55 |
| 3 | ಹೊಸಕೆರೆಹಳ್ಳಿ | ಉತ್ತರಹಳ್ಳಿ | ಬೆಂಗಳೂರು ದಕ್ಷಿಣ | – | – | – | 144.00 | 144.00 |
| | | | **ಒಟ್ಟು ವಿಸ್ತೀರ್ಣ** | **931.45** | **1750.55** | **–** | **144.00** | **2826.00** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ) (ಪ್ರ)

ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

**PR-556**

**SC-65**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ಸಂಖ್ಯೆ: ಸಿಐ 183 ಎಸ್‌ಪಿಕ್ಯೂ 2016 ಬೆಂಗಳೂರು, ದಿನಾಂಕ: 12.07.2016**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(4) ರ ಅಧಿಸೂಚನೆ**

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕದ ಕಾಯ್ದೆ ಸಂಖ್ಯೆ: 18) ವಿಧಿ 28(1) ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕ: 27.8.2015 ರಂದು ಕರ್ನಾಟಕದ ರಾಜ್ಯ ಪತ್ರ ಭಾಗ–III ಪುಟ ಸಂಖ್ಯೆ 3497 ರಿಂದ 3556 ರಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ: ಸಿಐ 84 ಎಸ್‌ಪಿಕ್ಯೂ 2015 ದಿನಾಂಕ: 23.7.2015 ರ ಪ್ರಕಾರ ಸರ್ಕಾರವು ಸದರಿ ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಸ್ವತ್ತುಗಳ ಪ್ರದೇಶವನ್ನು **"ಬೆಂಗಳೂರು ಮೆಟ್ರೋ ರೈಲು ಯೋಜನೆಯ"** ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲು ಇಚ್ಛೆಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಉದ್ದೇಶಕ್ಕೆ ಸ್ವಾಧೀನಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ. ಈ ಬಗ್ಗೆ ಮೇಲ್ಕಂಡ ಕಾಯ್ದೆ ವಿಧಿ 28(3) ರ ಪ್ರಕಾರ ಆದೇಶ ಹೊರಡಿಸಲಾಗಿದೆ.

